# ಟಿಎಲ್ಎಂ - ಅಡ್ಡಿಯೋ ಅನುಕೂಲವೋ ?

**ಅಂಕಿತ್ ಶುಕ್ಲಾ**

ಶೈಕ್ಷಣಿಕ ಬಳಗದಲ್ಲಿ ಕೆಲವೊಮ್ಮೆ ನಾವು ಬೋಧನಾ ಕ್ರಮ, ಕಲಿಕೆಯ ಅಭ್ಯಾಸಗಳು ಇತ್ಯಾದಿ ಪದಗಳನ್ನು ಬಳಸುತ್ತೇವೆ. ನಾನು ಈಗ ಚರ್ಚೆ ಮಾಡಲು ಹೊರಟಿರುವುದು ಬೋಧನಾ ಕಲಿಕಾ ಸಾಮಗ್ರಿಗಳು ಅಥವಾ ಸಾಮಾನ್ಯವಾಗಿ ಟಿಎಲ್ಎಂ ಎಂದು ಕರೆಯಲ್ಪಡುವ ವಿಶೇಷ ಪದದ ಬಗ್ಗೆ. ಈ ಟಿಎಲ್ಎಂ ಪದದ ಅರ್ಥವೇನು? ಇದರ ಉಪಯೋಗವೇನು? ಟಿಎಲ್ಎಂ ನ ವ್ಯಾಖ್ಯಾನವನ್ನು ನೋಡಿದರೆ, ಅದು ಬೋಧನೆ ಮತ್ತು ವಿದ್ಯಾಥಿಗಳ ಕಲಿಕೆಗೆ ಸಹಾಯ ಮಾಡುವ ಯಾವುದೇ ಸಾಮಗ್ರಿ ಎಂಬ ಅರ್ಥದ ವ್ಯಾಪ್ತಿಯೊಳಗೆ ಬರುತ್ತದೆ.

ಸಾಮಾನ್ಯ ತಪ್ಪು ತಿಳುವಳಿಕೆ ಏನೆಂದರೆ ಟಿಎಲ್ಎಂ ಗಳನ್ನು ಶಿಕ್ಷಕರಷ್ಟೇ ತಯಾರಿಸಬೇಕು ಹಾಗೂ ಅದನ್ನು ವಿದ್ಯಾರ್ಥಿಗಳು ವಿಷಯವೊಂದನ್ನು ಅರ್ಥಮಾಡಿಕೊಳ್ಳಲು ಬಳಸಬೇಕೆಂಬುದು. ನಾನೂ ಹಾಗೇ ತಿಳಿದಿದ್ದೆ-ಒಂದು ವಿಷಯದ ಬಗ್ಗೆ ಶಿಕ್ಷಕರಿಗೆ ಹೆಚ್ಚಿನ ತಿಳುವಳಿಕೆ ಇರುವುದರಿಂದ ಅವರೇ ಆ ವಿಷಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಬೇಕಾದ ಅವಕಾಶವನ್ನು ವಿದ್ಯಾರ್ಥಿಗಳಿಗೆ ಸೃಷ್ಟಿಸಿಕೊಡಬೇಕು ಎಂದು. ಬಹು ಬೇಗನೆ ನಾನು ನನ್ನ ನಂಬಿಕೆಗಳನ್ನು ಬದಲಾಯಿಸಿಕೊಳ್ಳಬೇಕಾಯಿತು.

**ಒಂದು ಘಟನೆ ಅದಕ್ಕೆ ಕಾರಣವಾಯಿತು.**

ಫೆಲೋಶಿಪ್ ಚೌಕಟ್ಟಿನಡಿಯಲ್ಲಿ ನಾನು ಶಾಲೆಯನ್ನು ಅರ್ಥಮಾಡಿಕೊಳ್ಳುವ ಕಾರ್ಯಕ್ರಮದಲ್ಲಿ ನಿಗದಿತ ಶಾಲೆಯೊಂದನ್ನು ಒಂದು ಸಮಯದವರೆಗೆ ನಿರಂತರವಾಗಿ ಅವಲೋಕಿಸಬೇಕಾಗಿತ್ತು. ಇಂಥ ಸಂದರ್ಭದಲ್ಲಿ ನಾನು ೫ ನೇ ತರಗತಿಯ ಗಣಿತದ ಪಾಠವೊಂದನ್ನು ಅವಲೋಕಿಸುತ್ತಾ ಇದ್ದೆ. ಶಿಕ್ಷಕರು ಸಂಖ್ಯೆಗಳ ಸ್ಥಾನಗಳನ್ನು ಪ್ರತಿನಿಧಿಸುವ ಸಂಖ್ಯಾ ರೇಖೆಯ ಬಗ್ಗೆ ಮಾತಾಡುತ್ತಿದ್ದರು. ಕೆಲವು ಮಕ್ಕಳಿಗೆ ಅದು ಅರ್ಥವಾಗುತ್ತಾ ಇರಲಿಲ್ಲ. ಶಿಕ್ಷಕರು ಅದನ್ನು ಪದೇ ಪದೇ ವಿವರಿಸಿದರೂ ಮಕ್ಕಳಿಗೆ ಅರ್ಥ ಮಾಡಿಕೊಳ್ಳುವುದು ಕಷ್ಟವಾಗುತ್ತಾಯಿತ್ತು. ಒಂದಷ್ಟು ಸಲ ಪ್ರಯತ್ನಿಸಿದ ನಂತರ ಅವರು ಸುಮ್ಮನೆ ಮುಂದಿನ ವಿಷಯಕ್ಕೆ ಹೋಗಿಬಿಟ್ಟರು.

ಮಾರನೇ ದಿನ ಒಬ್ಬ ಹುಡುಗ ಅಲ್ಲಲ್ಲಿ ಕುಣಿಕೆಗಳಿದ್ದ ಒಂದು ನೇರವಾದ ತಂತಿಯನ್ನು ಅವರಪ್ಪನಿಂದ ತಂದಿದ್ದ. ಅವನು ಶಿಕ್ಷಕರಿಗೆ ಆ ತಂತಿ ಸಂಖ್ಯಾ ರೇಖೆಯನ್ನು ಹೋಲುತ್ತದೆಯೆಂದೂ, ಅದರಲ್ಲಿನ ಕುಣಿಕೆಗಳನ್ನು ಸಂಖ್ಯೆಗಳನ್ನಾಗಿ ಪರಿಗಣಿಸಬೇಕೆಂದೂ ವಿವರಿಸಿದ. ಅದನ್ನು ನೋಡಿದ ಶಿಕ್ಷಕರಿಗೆ ಬಹಳ ಆಶ್ಚರ್ಯವಾಯಿತು. ಅವರು ಅದನ್ನು ಕೊಂಚ ಮಾರ್ಪಾಟಿನೊಂದಿಗೆ ತರಗತಿಯಲ್ಲಿ ಬಳಸಿಕೊಂಡರು. ಸೆಲೊಟೇಪಿನ ಸಹಾಯದಿಂದ ಕೆಲವು ಸಂಖ್ಯೆ ಬರೆದ ಚೀಟಿಗಳನ್ನು ಕುಣಿಕೆಗಳ ಮೇಲೆ ಅಂಟಿಸಿದರು. ಈಗ ಮಕ್ಕಳಿಗೆ ಸಂಖ್ಯಾರೇಖೆಯನ್ನು ಸುಲಭವಾಗಿ ಕಲ್ಪಿಸಿಕೊಳ್ಳಲು ಸಾಧ್ಯವಾಯಿತು. ಅಷ್ಟೇ ಅಲ್ಲದೆ ಕೆಲವು ಸರಳ ಕ್ರಿಯೆಗಳಾದ ಮುಂದೆ ಹೋಗುವುದು, ಹಿಂದೆ ಸರಿಯುವುದು ಮತ್ತು ನೆಗೆಯುವುದು ಇತ್ಯಾದಿಗಳನ್ನೂ ಈ ಟಿಎಲ್ಎಂ ನ ಸಹಾಯದಿಂದ ಮಾಡಲು ಶಕ್ತರಾದರು. ಹಾಗಾಗಿ ಈ ಘಟನೆಯು ನನ್ನಲ್ಲಿದ್ದ ತಪ್ಪು ಕಲ್ಪನೆಯನ್ನು ನಾಶ ಮಾಡಿತು.

**ದೃಶ್ಯೀಕರಿಸಿಕೊಳ್ಳಲು ಸಹಾಯಕವಾಗಿ ಟಿ ಎಲ್ ಎಂ**

ಇದು ನಾನು ಶಿಕ್ಷಕನಾದಾಗಿನ ಮಾತು. ಫೆಲೋಶಿಪ್ ಚೌಕಟ್ಟಿನ ಅಂಗವಾಗಿ ನಾನು ಶಿಕ್ಷಕನಾಗಿಯೂ ಕೆಲಸ ನಿಭಾಯಿಸಬೇಕಿತ್ತು. ನನ್ನ ತರಗತಿಯಲ್ಲಿ ನಾನು ಒಂದು ನಿರ್ದಿಷ್ಟ ವಿಷಯವಸ್ತುವಿನ ಬಗ್ಗೆ ಪಾಠ ಮಾಡುತ್ತಿದ್ದೆ. ವಿಷಯ - ೫ನೇ ತರಗತಿಗೆಂದೇ ಯೋಜಿತಗೊಂಡ ಸಮಯ ಮಾಪನ ಎಂಬುದಾಗಿತ್ತು. ನಾನು ಪ್ರಾಚೀನ ಕಾಲದ ಸಮಯ ಮಾಪನ ತಂತ್ರಗಳ ಬಗ್ಗೆ ಚರ್ಚೆ ಮಾಡುತ್ತ ಇದ್ದೆ. ಛಾಯಾ/ನೆರಳಿನ ಗಡಿಯಾರ, ಜಲ ಗಡಿಯಾರ, ಮರಳು ಗಡಿಯಾರ ಇತ್ಯಾದಿಗಳ ಬಗ್ಗೆ ಚರ್ಚೆ ನಡೆಯುತ್ತಾ ಇತ್ತು. ಮಕ್ಕಳಿಗೆ ಪರಿಕಲ್ಪನೆಯೇನೋ ಅರ್ಥವಾಗಿತ್ತು ಆದರೆ ಆ ಉಪಕರಣಗಳನ್ನು ಕಲ್ಪಿಸಿಕೊಳ್ಳುವುದು ಕಷ್ಟವಾಗುತ್ತಾಯಿತ್ತು.

ಅದನ್ನು ಸುಲಭಗೊಳಿಸಲು ನಾನು ವಿದ್ಯಾರ್ಥಿಗಳ ಸಹಾಯ ತೆಗೆದುಕೊಂಡು ಆ ಉಪಕರಣಗಳಲ್ಲೊಂದನ್ನು ತಯಾರಿಸಲು ನಿರ್ಧರಿಸಿದೆ. ನಾವು ಮರಳು ಗಡಿಯಾರದ ಮಾದರಿಯೊಂದನ್ನು ತಯಾರಿಸಲು ನಿರ್ಧರಿಸಿದೆವು. ಅದರ ಮೊದಲ ಹಂತವಾಗಿ, ನಾವು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಪಟ್ಟಿ ಮಾಡಿದೆವು: ಮುಚ್ಚಳವುಳ್ಳ ಪ್ಲಾಸ್ಟಿಕ್ ಬಾಟಲಿಗಳು, ಫೆವಿಸ್ಟಿಕ್ ಮತ್ತು ಮರಳು. ವಿದ್ಯಾರ್ಥಿಗಳು ಸಾಮಗ್ರಿಗಳನ್ನು ತಾವೇ ತರಲು ಮುಂದಾದರು.



ಮಾರನೇ ದಿನ ನಾನು ಶಾಲೆಗೆ ಹೋದಾಗ, ಮಕ್ಕಳೆಲ್ಲ ಬಹಳ ಉತ್ಸುಕರಾಗಿದ್ದರು. ಅವರು ತಾವು ತಂದ ಸಾಮಗ್ರಿಗಳನ್ನು ತೋರಿಸಿದರು. ಮರಳು ಅಷ್ಟೊಂದು ನುಣುಪಿರಲಿಲ್ಲ ಅದನ್ನು ಸೋಸುವ ಅಗತ್ಯವಿತ್ತು. ನಾನು ಒಂದು ಜರಡಿ ಬೇಕೆಂದು ಕೇಳಿದೆ. ಆಗ ನಾನು ಈ ಬಗ್ಗೆ ಕೆಲವು ವಿದ್ಯಾರ್ಥಿಗಳೊಂದಿಗೆ ಮಾತಾಡುತ್ತಿರುವಾಗ ಅವರಲ್ಲೊಬ್ಬ ಹೊರಗೆ ಹೋಗಿ ಬಹಳ ಮೃದು ಪ್ಲಾಸ್ಟಿಕ್‌ನಿಂದ ಮಾಡಿದ ಬಾಟಲ್ ಒಂದನ್ನು ಹುಡುಕಿ ತಂದದ್ದನ್ನು ಗಮನಿಸಿದೆ. ಅವನು ಒಂದು ಬಾಟಲ್ ತೆಗೆದುಕೊಂಡು ಅದರಲ್ಲಿ ಒಂದು ಕಡ್ಡಿಯ

ಸಹಾಯದಿಂದ ರಂಧ್ರಗಳನ್ನು ಕೊರೆದು ಮರಳನ್ನು ಸೋಸಲು ಶುರು ಮಾಡಿದ. ಕಡ್ಡಿಯಿಂದ ಮಾಡಿದ ರಂಧ್ರಗಳ ಗಾತ್ರ ದೊಡ್ಡದಿದ್ದರೂ ಸಹ, ಅದರಲ್ಲಿ ಸೋಸಿದ ಮರಳು ಸಾಕಷ್ಟು ನುಣುಪಾಗದೇ ಹೋದರು ಸಹ ನನಗೆ ಇದರಿಂದ ಬಹಳ ಆಶ್ಚರ್ಯವಾಯಿತು. ಇದೊಂದು ಅದ್ಭುತ ಉಪಾಯವಾಗಿತ್ತು-ಮಕ್ಕಳಲ್ಲಿ ಎಂಥೆಂಥ ಸೃಜನಶೀಲತೆ ಅಡಗಿರುತ್ತದೆ ಎಂದು ಹೇಳುವುದು ಅಸಾಧ್ಯ.

ಮರಳನ್ನು ಹೀಗೆ ಸೋಸಿದ ನಂತರ ನಾವು ಬಾಟಲಿಯ ಮುಚ್ಚಳಗಳಲ್ಲಿ ರಂಧ್ರ ಮಾಡಿ ಬಾಟಲಿಗಳೆರಡರ ಮುಚ್ಚಳಗಳನ್ನೂ ಫೆವಿಸ್ಟಿಕ್ಕಿನಿಂದ ಅಂಟಿಸಿದೆವು. ಈಗ ಮರಳು ಮೇಲಿನ ಬಾಟಲಿಯಿಂದ ಕೆಳಗಿನ ಬಾಟಲಿಗೆ ಇಳಿದು ಬರುತ್ತಿತ್ತು. ವಿದ್ಯಾರ್ಥಿಗಳು ಈಗ ಸಮಯವನ್ನು ಅಳೆಯುವ ವಿಧಾನವನ್ನು ಕಲ್ಪಿಸಿಕೊಳ್ಳಬಲ್ಲರಾಗಿದ್ದರು. ಮರಳು ಗಡಿಯಾರ ಮಾಡುವಾಗ ಮತ್ತು ಮಾಡಿದ ನಂತರ ಮಕ್ಕಳು ಅನುಭವಿಸಿದ ಆನಂದ ಕಲ್ಪನಾತೀತ.

## ಪರಿಕಲ್ಪನೆಯನ್ನು ಸರಳಗೊಳಿಸುವ ಸಾಧನವಾಗಿ ಟಿ ಎಲ್ ಎಂ

ನಾವು ಮತ್ತೊಮ್ಮೆ ಅದೇ ತರಗತಿಯಲ್ಲಿ ಅದೇ ಪರಿಕಲ್ಪನೆಯನ್ನು ಚರ್ಚಿಸುತ್ತಿದ್ದೆವು, ಆದರೆ ಈ ಸಲ ವಿಷಯ ಸಮಯವನ್ನು ವ್ಯವಕಲನ ಮಾಡುವ ಬಗ್ಗೆ ಆಗಿತ್ತು. ಸಮಯವನ್ನು ವ್ಯವಕಲನ ಮಾಡುವಾಗ ನಿಮಿಷಗಳಿಂದ 'ಎರವಲು' ಪಡೆಯುವಲ್ಲಿ ವಿದ್ಯಾರ್ಥಿಗಳು ಬಹಳ ಕಷ್ಟಪಡುತ್ತಾ ಇದ್ದರು. ಉದಾಹರಣೆಗೆ, ೩ ಗಂಟೆ/ತಾಸು ೪೯ ನಿಮಿಷಗಳನ್ನು ೫ ತಾಸು/ಗಂಟೆ ೫೫ ನಿಮಿಷಗಳಿಂದ ಕಳೆಯುವಾಗ ಕಷ್ಟಪಡುತ್ತಾ ಇದ್ದರು. ಹಾಗಾಗಿ ಇದನ್ನು ಸರಳಗೊಳಿಸಲು ನಾನು ಐಸ್ ಕ್ರೀಮ್ ಕಡ್ಡಿಗಳನ್ನು ಬಳಸಿದೆ. ಮಕ್ಕಳಿಗೆ ಕಡ್ಡಿಗಳನ್ನು ೬೦ ರ ಕಟ್ಟುಗಳನ್ನಾಗಿ ವಿಂಗಡಿಸಲು ಹೇಳಿದೆ. ಅವರಿಗೆಷ್ಟು ರೋಮಾಂಚನವಾಯಿತೆಂದರೆ ಕೆಲವರು ಒಂದಕ್ಕಿಂತ ಹೆಚ್ಚು ಕಟ್ಟುಗಳನ್ನು ಮಾಡಿದರು. ಈಗ ಸಮಸ್ಯೆಗೆ ಬರುವುದಾದರೆ: ತಾಸಿನ ಅಂಕಣದಲ್ಲಿ ಕಡ್ಡಿಯ ಕಟ್ಟುಗಳನ್ನು ಇಟ್ಟೆವು, ನಿಮಿಷದ ಅಂಕಣದಲ್ಲಿ ಕೆಲವು ಬಿಡಿ ಕಡ್ಡಿಗಳನ್ನು ಇಟ್ಟೆವು. ತಾಸಿನ ಅಂಕಣದಿಂದ ಅವರು 'ಎರವಲು' ಪಡೆಯಬೇಕಾಗಿ ಬಂದಾಗ ಮಕ್ಕಳು ಒಂದು ಕಟ್ಟಿನ ಮೊತ್ತ ೬೦ ನಿಮಿಷಗಳಿಗೆ ಸಮ ಎಂಬುದನ್ನು ಸ್ಪಷ್ಟವಾಗಿ ಕಂಡುಕೊಂಡರು ಹಾಗೂ ಈಗ ಅವರಿಗೆ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಲು ಸಾಧ್ಯವಾಯಿತು.



ಇದಕ್ಕೂ ಮೊದಲು ವಿದ್ಯಾರ್ಥಿಗಳಿಗೆ ಒಂದು ತಾಸಿನಲ್ಲಿ ೬೦ ನಿಮಿಷಗಳಿರುತ್ತವೆ ಎಂಬುದನ್ನು ಕಲ್ಪಿಸಿಕೊಳ್ಳಲು ಕಷ್ಟವಾಗುತ್ತಿತ್ತು. ಅವರೇ ತಯಾರಿಸಿದ ಒಂದು ಉದಾಹರಣೆ ಆ ಪರಿಕಲ್ಪನೆಯನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಹಾಯ ಮಾಡಿತು. ಅದು ಚಟುವಟಿಕೆಯ ಹಿಂದಿನ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಸಾಧ್ಯವಾಯಿತು. ಈಗ ಕಡ್ಡಿಗಳ ಸಹಾಯವಿಲ್ಲದೆಯೇ ಅವರಿಗೆ ವ್ಯವಕಲನ ಮಾಡುವುದು ಸಾಧ್ಯವಾಗಿತ್ತು.

ಕಲಿಕೆಯ ಮೌಲ್ಯಮಾಪನದ ಸಾಧನವಾಗಿ ಟಿ ಎಲ್ ಎಂ

ನಾನು ಚರ್ಚಿಸ ಹೊರಟಿರುವ ಮುಂದಿನ ಟಿಎಲ್‌ಎಂ ಅನ್ನು ಕೆಳಗಿನ ತರಗತಿಗಳಾದ ಒಂದು ಮತ್ತು ಎರಡನೇ ತರಗತಿಗಳಲ್ಲಿ ಬಳಸಿಕೊಳ್ಳಬಹುದು. ಈ ಚಟುವಟಿಕೆಯನ್ನು ಒಂದು ಮಗುವು ಅಂಕಿಗಳನ್ನು ಗುರುತಿಸಲು ಕಲಿತಿದೆಯೇ ಇಲ್ಲವೇ ಎಂಬುದನ್ನು ಅಳೆಯಲು ಬಳಸಿಕೊಳ್ಳಬಹುದು.

ಮಕ್ಕಳ ಸುತ್ತಮುತ್ತ ಇರುವ ಹಾಗೂ ಮಕ್ಕಳು ಇಷ್ಟಪಡುವಂಥ ಕೆಲವು ಬಣ್ಣ ಬಣ್ಣದ ಚಿತ್ರಪಟಗಳನ್ನು ಅಚ್ಚು ಹಾಕಿ ಲ್ಯಾಮಿನೇಟ್ ಮಾಡಿ ಇಡಲಾಯಿತು. ಆನಂತರ, ಆ ಚಿತ್ರಗಳನ್ನು ಹತ್ತು ಭಾಗಗಳನ್ನಾಗಿ ಮಾಡಿ ಆ ಭಾಗಗಳ ಮೇಲೆ ಒಂದೊಂದರಂತೆ ಒಂದರಿಂದ ಹತ್ತರವರೆಗಿನ ಅಂಕಿಗಳನ್ನು ಬರೆಯಲಾಯಿತು. ಆ ಚಿತ್ರಗಳನ್ನು ಸಂಪೂರ್ಣಗೊಳಿಸಲು ಮಕ್ಕಳು ಆ ಅಂಕಿಗಳುಳ್ಳ ಚಿತ್ರದ ಭಾಗಗಳನ್ನು ಸರಿಯಾದ ಕ್ರಮದಲ್ಲಿ ಜೋಡಿಸಬೇಕಾಗಿತ್ತು. ಈ ಟಿಎಲ್‌ಎಂನ ಸಹಾಯದಿಂದ ಮಕ್ಕಳಿಗೆ ತಾವು ಹೊಸದೇನನ್ನೋ ಮಾಡುತ್ತಿದ್ದೇವೆ ಎಂಬ ಭಾವನೆ ಬರುತ್ತದೆ. ಮತ್ತು ಅವರಿಗೆ ಯಾವ ರೀತಿಯ ಚಿತ್ರ ಅನಾವರಣಗೊಳ್ಳುತ್ತದೆ ಎಂಬ ಕುತೂಹಲ ಕೂಡ ಇರುತ್ತದೆ.





ಈ ಚಟುವಟಿಕೆಯಿಂದ ಒಂದು ಮಗುವಿನ ಕಲಿಕೆಯ ಮಟ್ಟವನ್ನು ಅದೇ ಹಳೆಯ ಕಾಗದ ಮತ್ತು ಪೆನ್ಸಿಲ್ ನ ಪರೀಕ್ಷೆಯ ಬದಲು ಬಹಳ ಆಕರ್ಷಕ ಹಾಗೂ ಪರಸ್ಪರ ಸಂವಾದಿಸುವ ವಿಧಾನದಲ್ಲಿ ಅಳೆಯಬಹುದು. ನಿಜವಾಗಿ ಹೇಳಬೇಕೆಂದರೆ ಸಾಮಾನ್ಯವಾಗಿ ತರಗತಿಗಳ ಒಳಗೆ ಏನಾಗುತ್ತದೆ ಎಂದರೆ, ಶಿಕ್ಷಕರು ಬರುತ್ತಾರೆ, ಕಪ್ಪುಹಲಗೆಯ ಮೇಲೆ ಏನನ್ನೋ ಗೀಚುತ್ತಾರೆ ಮತ್ತು ಮಕ್ಕಳು ಒಕ್ಕೊರಲಿನಲ್ಲಿ ೧,೨,೩ ಎಂದು ಕಿರುಚುತ್ತಾರೆ. ಅವರಿಗೆ ಅದರ ಅರ್ಥ ಸಹಿತ ಆಗಿರುವುದಿಲ್ಲ.

ಹೀಗೇ ಮಾತನಾಡುತ್ತಿರುವಾಗ ಒಬ್ಬ ಶಿಕ್ಷಕರು ನನ್ನ ಹತ್ತಿರ ಹೇಳಿಕೊಂಡರು, ಅವರು ಮುಂಚೆ ಟಿಎಲ್‌ಎಂ ಗಳನ್ನು ಕಡೆಗಣಿಸುತ್ತಿದ್ದರು ಹಾಗೂ ಅವರ ಬೋಧನಾ ವಿಧಾನವು ಕೂಡ ಅಷ್ಟಕಷ್ಟೇ ಇತ್ತು. ಆದರೆ ಒಂದು ಕಾರ್ಯಾಗಾರದಲ್ಲಿ ಭಾಗವಹಿಸಿದ ನಂತರ ಅವರಿಗೆ ಕಾಣುವ ಪ್ರತಿಯೊಂದು ವಸ್ತುವನ್ನೂ ಟಿಎಲ್‌ಎಂ ಆಗಿ ಪರಿವರ್ತಿಸಬಹುದು ಎಂಬುದರ ಅರಿವಾಯಿತು. ಅವರೆಂದರು, 'ನಾನು ಎಲ್ಲೇ ಹೋದರೂ ಈ ಟಿಎಲ್‌ಎಂ ಗಳನ್ನು ಕಾಣುತ್ತೇನೆ. ನನ್ನ ಬೆಳಗಿನ ವಾಯುವಿಹಾರದ ಸಮಯದಲ್ಲಿ ನುಣುಪಾದ ಸಣ್ಣ ಕಲ್ಲುಗಳನ್ನು ಸಂಗ್ರಹಿಸುತ್ತೇನೆ. ಐಸ್ ಕ್ರೀಮ್ ಅಂಗಡಿಗಳಲ್ಲಿ ಕಡ್ಡಿಗಳನ್ನು ಸಂಗ್ರಹಿಸುತ್ತೇನೆ. ಹೊಟೇಲುಗಳಲ್ಲಿ ಪೇಪರ್ ತಟ್ಟೆಗಳನ್ನು ಸಂಗ್ರಹಿಸುತ್ತೇನೆ. ನಾನು ಹೀಗೆ ಸಂಗ್ರಹಿಸಿದ ಈ ವಸ್ತುಗಳು ತರಗತಿಯ ನಿರ್ವಹಣೆಯಲ್ಲಿ ಬಹಳ ಸಹಾಯ ಮಾಡಿವೆ. ನನ್ನ ಬೋಧನಾ ವಿಧಾನಗಳು ಸಹ ಉತ್ತಮಗೊಂಡಿವೆ ಎಂಬುದರ ಅರಿವು ನನಗಾಗಿದೆ.'

ಇನ್ನೊಂದು ಕಡೆ ಟಿಎಲ್‌ಎಂಗಳಿಗೆ ಅವುಗಳದ್ದೇ ಆದ ಮಿತಿಗಳಿವೆ. ಸಮಸ್ಯೆ ಇರುವುದು ಟಿಎಲ್‌ಎಂಗಳ ಬಳಕೆಯಲ್ಲಿ: ಶಿಕ್ಷಕರು ಬರೀ ಟಿಎಲ್‌ಎಂಗಳ ಮೇಲೆಯೇ ಅವಲಂಬಿತರಾದರೆ ಅದು ಪರಿಕಲ್ಪನೆಯನ್ನು ತಿಳಿಸುವ ಮಾಧ್ಯಮ ಮಾತ್ರ ಆಗಿರುತ್ತದೆ. ಆದರೆ ನಾನು ಗಮನಿಸಿದ ಪ್ರಕಾರ ಕೆಲವೊಮ್ಮೆ ಶಿಕ್ಷಕರು ಟಿಎಲ್‌ಎಂ ಗಳಿಂದ ಎಷ್ಟು ಪ್ರಭಾವಿತಗೊಳ್ಳುತ್ತಾರೆ ಎಂದರೆ ಅವರು ಪರಿಕಲ್ಪನೆಯ ಆಳಕ್ಕಿಳಿಯುವುದೇ ಇಲ್ಲ. ಅವನ್ನು ಬಳಸಬೇಕು ಆದರೆ ಅವುಗಳ ಹಿಂದಿರುವ ಪರಿಕಲ್ಪನೆಗಳನ್ನೂ ಚರ್ಚಿಸಬೇಕು. ಅವು ಪಯಣದ ಸಾಧನ ಅಷ್ಟೇ ಹೊರತು ಅವೇ ಗಮ್ಯ ಅಲ್ಲ. ಮತ್ತೆ, ಟಿಎಲ್‌ಎಂ ಗಳು ಕಲಿಯುವವರು ಅವುಗಳನ್ನು ತಯಾರಿಸುವ ಪ್ರಕ್ರಿಯೆಯಲ್ಲಿ ಎಷ್ಟು ತೊಡಗಿಸಿಕೊಳ್ಳುತ್ತಾರೋ ಅಷ್ಟು ಪರಿಣಾಮಕಾರಿಯಾಗುತ್ತವೆ. ಕಲಿಯುವವರು ಕೂಡ ಟಿಎಲ್‌ಎಂ ಗಳ ಅನುಕೂಲ ಹಾಗೂ ಮಿತಿಯನ್ನು ಕಂಡುಹಿಡಿಯಬಹುದು. ಇದು ಕೇವಲ ಶಿಕ್ಷಕರ ಜವಾಬ್ದಾರಿ ಮಾತ್ರ ಅಲ್ಲ.

***

**ಅಂಕಿತ್ ಶುಕ್ಲಾ:** ಇವರು ಉತ್ತರ ಪ್ರದೇಶದ ಲಕ್ನೋ ತಾಂತ್ರಿಕ ವಿಶ್ವವಿದ್ಯಾಲಯದಿಂದ ಬಿ.ಟೆಕ್ ಪದವಿ ಪಡೆದಿದ್ದು, ಅಜೀಂ ಪ್ರೇಮ್ ಜಿ ಸಂಸ್ಥೆಯಲ್ಲಿ 2017 ರಿಂದ ಕೆಲಸ ಮಾಡುತ್ತಿದ್ದಾರೆ. ಅದಕ್ಕೂ ಮುಂಚೆ ಅವರು ಬಟಿಂಡಾದಲ್ಲಿ ಮಕ್ಕಳ ಹಕ್ಕುಗಳಿಗೆ ಸಂಬಂಧಪಟ್ಟ ಯೋಜನೆಯೊಂದರಲ್ಲಿ ಯೋಜನಾ ನಿರ್ವಹಣಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದರು. ಪ್ರಸ್ತುತ ಛತ್ತೀಸ್ಘಢದ ಧಮ್ತರಿಯಲ್ಲಿ ನೆಲೆಸಿದ್ದಾರೆ. ಅವರ ಸಂಪರ್ಕಕ್ಕೆ: ankit.shukla@azimpremjifoundation.org

ಅನುವಾದ: ಸ್ವಯಂಪ್ರಭಾ ಹೆಗಡೆ ಪರಿಶೀಲನೆ: ನಾಗಮಣಿ ಎಸ್.ಎನ್.